ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಮಂಗಳವಾರ, ದಿನಾಂಕ : 23ನೇ ಜುಲೈ, 2019

ವೈದ್ಯಕೀಯ ಕಾಲೇಜುಗಳಲ್ಲಿ ಭರ್ತಿಯಾಗದಿರುವ ಸೀಟುಗಳ ಕುರಿತು

ಶ್ರೀ ರವಿಕುಮಾರ್. ಎನ್ (ವಿಧಾನ ಸಭೆಯಿಂದ ಚುನಾಯಿತರಾದವರು):-

534 (497) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2018-19ನೇ ಶೈಕ್ಷಣಿಕ ವರ್ಷದ ಸಾಲಿನ ವೈದ್ಯಕೀಯ ಶಿಕ್ಷಣ ಕಾಲೇಜುಗಳ ಪ್ರವೇಶ ಪ್ರಕ್ರಿಯೆ ಮುಗಿದ ಬಳಿಕ ಯಾವ ಯಾವ ಕಾಲೇಜುಗಳಲ್ಲಿ ಸರ್ಕಾರದ ಲೆಕ್ಕದಲ್ಲಿನ ಸೀಟುಗಳು ಭರ್ತಿಯಾಗದೆ ಉಳಿದಿರುತ್ತದೆ; ಈ ಸೀಟುಗಳು ಯಾವ ವರ್ಗಕ್ಕೆ ಸೇರಿದವುಗಳಾಗಿದೆ; ಇದರಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದ ಸೀಟುಗಳ ಸಂಖ್ಯೆ ಎಷ್ಟು; (ಕಾಲೇಜುವಾರು ಜಿಲ್ಲಾವಾರು ವಿವರ ನೀಡುವುದು)

(ಆ) 2018-19ನೇ ಶೈಕ್ಷಣಿಕ ವರ್ಷದ ಸಾಲಿನಲ್ಲಿ ಎನ್.ಆರ್.ಐ. ಕೋಟಾದ ಎಷ್ಟು ಸೀಟುಗಳನ್ನು ಸರ್ಕಾರಕ್ಕೆ ವೈದ್ಯಕೀಯ ಶಿಕ್ಷಣ ಕಾಲೇಜುಗಳು ಬಿಟ್ಟು ಕೊಟ್ಟಿದ್ದವು; ಇವುಗಳಲ್ಲಿ ಎಷ್ಟು ಸೀಟುಗಳನ್ನು ಸರ್ಕಾರ ಭರ್ತಿ ಮಾಡಿತ್ತು; ವೈದ್ಯಕೀಯ ಕಾಲೇಜುಗಳ ಆಡಳಿತ ಮಂಡಳಿಗೆ ಸರ್ಕಾರ ಹಿಂತಿರುಗಿಸಿದ ಸೀಟುಗಳ ಸಂಖ್ಯೆ ಎಷ್ಟು; (ಕಾಲೇಜುವಾರು ಜಿಲ್ಲಾವಾರು ವಿವರ ನೀಡುವುದು)

(ಇ) 2018-19ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಕಾಲೇಜುಗಳ ಪ್ರವೇಶ ಪ್ರಕ್ರಿಯೆ ಮುಗಿಯಲು ಸರ್ಕಾರವು ನಿಗಧಿಪಡಿಸಿದ ಕೊನೆಯ ದಿನಾಂಕ ಯಾವುದು; ಪ್ರವೇಶ ಪ್ರಕ್ರಿಯೆ ಮುಗಿದ ಬಳಿಕ ಸರ್ಕಾರ ಹಿಂತಿರುಗಿಸಿದ ಸೀಟುಗಳನ್ನು ಆಡಳಿತ ಮಂಡಳಿಯವರು ಭರ್ತಿ ಮಾಡಲು ನಿಗಧಿಪಡಿಸಿದ ಕೊನೆಯ ದಿನಾಂಕ ಯಾವುದು ?